# ಕರ್ನಾಟಕ ವಿಧಾನಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 483
2 ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3 ಉತ್ತರಿಸುವ ದಿನಾಂಕ : 04.02.2021
4 ಉತ್ತರಿಸುವ ಸಚಿವರು : ಗೃಹ ಸಚಿವರು

| ಪ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಪೊಲೀಸ್ ಇಲಾಖೆಯಲ್ಲಿ ಯಾವುದೇ ಹುದ್ದೆಗಳ (PSI, RSI PC) ನೇಮಕಾತಿ ಮಾಡಿಕೊಳ್ಳುವಾಗ ಅಭ್ಯರ್ಥಿಗಳು ಆನ್‌ಲೈನ್ ಅರ್ಜಿ ಸಲ್ಲಿಸುವಾಗ ಅರ್ಜಿ ನಮೂನೆಯಲ್ಲಿ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿಲ್ಲದೇ ಇರುವುದು ಕಾರಣಗಳನ್ನು ನಿಜವೇ? | ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಮತ್ತು ಪೊಲೀಸ್ ಕಾನ್ಸ್‌ಟೇಬಲ್ ವೃಂದದ ವಿವಿಧ ಹುದ್ದೆಗಳ ನೇಮಕಾತಿ ಪ್ರಕ್ರಿಯೆಯನ್ನು ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಕೈಗೊಳ್ಳಲಾಗುತ್ತಿದೆ. ಸದರಿ ನಿಯಮಗಳಂತೆ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರಿಗಳು ಜಿಲ್ಲಾ / ಕಮೀಷನರ್ ಘಟಕದ ಅಧಿಕಾರಿಗಳಾಗಿರುತ್ತಾರೆ ಹಾಗೂ ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಹುದ್ದೆಗಳ ಆಯ್ಕೆ ಪ್ರಾಧಿಕಾರಿಗಳು ಎಡಿಜಿಪಿ, ನೇಮಕಾತಿ ರವರಾಗಿರುತ್ತಾರೆ ಮತ್ತು ನೇಮಕಾತಿ ಪ್ರಾಧಿಕಾರಿಗಳು ಕಮೀಷನರೇಟ್ /ವಲಯ ಅಧಿಕಾರಿಗಳಾಗಿರುತ್ತಾರೆ. ಆದ್ದರಿಂದ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳನ್ನು ಜಿಲ್ಲಾ / ಕಮೀಷನರೇಟ್ ಘಟಕವಾರು ಹಾಗೂ ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಹುದ್ದೆಗಳನ್ನು ರಾಜ್ಯ ಮಟ್ಟದಲ್ಲಿ ಆಯ್ಕೆ ಮಾಡಲಾಗುತ್ತಿದೆ.<br><br>**ಪೊಲೀಸ್ ಕಾನ್ಸ್‌ಟೇಬಲ್:** ಪಿಸಿ ಹುದ್ದೆಗಳ ಆಯ್ಕೆಯು ಜಿಲ್ಲಾ / ಕಮೀಷನರೇಟ್ ಮಟ್ಟದ ಆಯ್ಕೆಯಾಗಿರುವುದರಿಂದ ಅಭ್ಯರ್ಥಿಗಳು ಆಯ್ಕೆ ಬಯಸಿ ಅರ್ಜಿ ಸಲ್ಲಿಸುವ ಜಿಲ್ಲಾ / ಕಮೀಷನರೇಟ್‌ಗಳಗೆ ಅವರುಗಳನ್ನು ಆಯ್ಕೆಗೆ ಪರಿಗಣಿಸಬೇಕಾಗಿರುತ್ತದೆ. ಆದ್ದರಿಂದ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಗೆ ಅರ್ಜಿ ನಮೂನೆಯಲ್ಲಿ ಸದರಿಯವರುಗಳು ಆಯ್ಕೆ ಬಯಸುವ ಜಿಲ್ಲಾ / ಕಮೀಷನರೇಟ್‌ಗಳ ಆಯ್ಕೆಗೆ ಅವಕಾಶ ಕಲ್ಪಿಸಲಾಗಿದ್ದು, ಅದರಂತೆ ಅಭ್ಯರ್ಥಿಗಳು ಆಯ್ಕೆ ಮಾಡಿಕೊಂಡಿರುವ ಸ್ಥಳಗಳಲ್ಲಿಯೇ ಲಿಖಿತ ಪರೀಕ್ಷೆ ಬರೆಯಲು ಅನುವು ಮಾಡಿಕೊಡಲಾಗಿರುತ್ತದೆ.<br><br>ಆದಾಗ್ಯೂ ಸಹ 2020-21ನೇ ಸಾಲಿನಲ್ಲಿ ನಡೆದ ಲಿಖಿತ ಪರೀಕ್ಷೆಗಳಲ್ಲಿ ಕೋವಿಡ್-19 ಕಾರಣದಿಂದಾಗಿ ಅಭ್ಯರ್ಥಿಗಳಗೆ ಪ್ರಯಾಣಿಸಲು ತೊಂದರೆಯಾಗಬಾರದೆಂಬ ಕಾರಣದಿಂದ ಅವರವರ |

| | | |
|---|---|---|
| | | ಸ್ವಂತ ಜಿಲ್ಲೆಗಳಲ್ಲಿ ಅಥವಾ ಹತ್ತಿರದ ಜಿಲ್ಲೆಗಳಲ್ಲಿ ಪರೀಕ್ಷೆ ಬರೆಯಲು ಅನುವು ಮಾಡಿಕೊಡಲಾಗಿರುತ್ತದೆ.<br><br>ಇನ್ನುಳಿದಂತೆ ದೈಹಿಕ ಪರೀಕ್ಷೆಯನ್ನು ವೃಂದ ಮತ್ತು ನೇಮಕಾತಿ ನಿಯಮದಂತೆ ಸಂಬಂಧಿಸಿದ ಆಯ್ಕೆ ಪ್ರಾಧಿಕಾರಿಗಳೇ ನಡೆಸಬೇಕಾಗಿರುವುದರಿಂದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿ ಆಯ್ಕೆ ಮಾಡಿಕೊಂಡ ಜಿಲ್ಲೆಗಳಲ್ಲಿಯೇ ನಡೆಸಬೇಕಾಗಿರುತ್ತದೆ.<br><br>**<u>ಪೊಲೀಸ್ ಸಬ್-ಇನ್ಸ್‌ಪೆಕ್ಟರ್</u>:** ಪಿಎಸ್ಐ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ದೈಹಿಕ ಪರೀಕ್ಷೆಗಳನ್ನು ಅಭ್ಯರ್ಥಿಗಳ ಸ್ವಂತ ಜಿಲ್ಲೆಗಳಲ್ಲಿ ಅಥವಾ ಹತ್ತಿರದ ಜಿಲ್ಲೆಗಳಲ್ಲಿ ನಡೆಸಲಾಗುತ್ತಿದೆ. ದೇಹದಾರ್ಢ್ಯತೆ ಪರೀಕ್ಷೆಗಳಲ್ಲಿ ಅರ್ಹತೆ ಪಡೆದ ನಂತರ ಲಿಖಿತ ಪರೀಕ್ಷೆಗೆ ಹಾಜರಾಗುವ ಅಭ್ಯರ್ಥಿಗಳ ಸಂಖ್ಯೆ ಕಡಿಮೆ ಇರುತ್ತದೆ ಹಾಗೂ ಸದರಿ ಪರೀಕ್ಷೆಗಳು ಅತ್ಯಂತ ಸೂಕ್ಷ್ಮವಾಗಿದ್ದು ಅತೀ ಜಾಗರೂಕತೆಯಿಂದ ಪರೀಕ್ಷಾ ಕೇಂದ್ರಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಕಾನೂನು ಸುವ್ಯವಸ್ಥೆಯ ಹಿತದೃಷ್ಟಿಯಿಂದ ಆಯ್ಕೆ ಮಾಡಬೇಕಾಗಿರುತ್ತದೆ. ಆದ್ದರಿಂದ ರಾಜ್ಯದ ಎಲ್ಲಾ ಜಿಲ್ಲಾ ಮತ್ತು ನಗರ ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ನಡೆಸುವುದು ಸಾಧ್ಯವಾಗುವುದಿಲ್ಲ. ಆದಾಗ್ಯೂ ಅಭ್ಯರ್ಥಿಗಳಿಗೆ ದೂರದ ಸ್ಥಳಗಳಿಗೆ ಪ್ರಯಾಣ ಮಾಡಿ ಪರೀಕ್ಷೆ ಹಾಜರಾಗುವುದು ತೊಂದರೆಯಾಗುತ್ತದೆ ಎಂಬ ಕಾರಣದಿಂದ ಅಭ್ಯರ್ಥಿಗಳ ಸ್ವಂತ ಜಿಲ್ಲೆಗಳನ್ನು ಪರಿಗಣನೆಗೆ ತೆಗೆದುಕೊಂಡು ಹತ್ತಿರದ ಕೇಂದ್ರದಲ್ಲಿ ಪರೀಕ್ಷೆಗಳನ್ನು ನಡೆಸಲಾಗಿರುತ್ತದೆ. ಅಲ್ಲದೆ ಪೊಲೀಸ್ ಸಬ್-ಇನ್ಸ್‌ಪೆಕ್ಟರ್ (ಸಿವಿಲ್) ಹೊರತುಪಡಿಸಿ ಇನ್ನುಳಿದ ಪಿಎಸ್ಐ ವೃಂದದ ಕೆಲವು ಹುದ್ದೆಗಳಿಗೆ ಅತೀ ಕಡಿಮೆ ಸಂಖ್ಯೆಯ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸಿರುವ ಕಾರಣ ಅಂತಹ ಸಂದರ್ಭದಲ್ಲಿ ರಾಜ್ಯದ ಎಲ್ಲಾ ಕೇಂದ್ರಗಳಲ್ಲಿ ಪರೀಕ್ಷೆ ನಡೆಸಲು ಸಾಧ್ಯವಾಗುವುದಿಲ್ಲ. ಹೀಗಾಗಿ ಯಾವುದಾದರೂ ಎರಡು ಅಥವಾ ಮೂರು ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ನಡೆಸಬೇಕಾಗುತ್ತದೆ. ಹೀಗಾಗಿ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು ಅಭ್ಯರ್ಥಿಗಳಿಗೆ ನೀಡಲಾಗುವುದಿಲ್ಲ. |
| ಆ) | KPSC, KEA ಹಾಗೂ ಇನ್ನಿತರೆ ಪರೀಕ್ಷಾ ಪ್ರಾಧಿಕಾರ ಸಂಸ್ಥೆಗಳು ಅಭ್ಯರ್ಥಿಗಳಿಗೆ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡಲು ಅವಕಾಶವನ್ನು ನೀಡುತ್ತಿದ್ದು, ಈ ಪದ್ಧತಿಯು KSP ಗೆ ಏಕೆ ಅನ್ವಯಿಸುವುದಿಲ್ಲ; | ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳ ಆಯ್ಕೆಗೆ ಸಂಬಂಧಿಸಿದಂತೆ, ಅಭ್ಯರ್ಥಿಗಳು ಇಚ್ಛಿಸಲಾದ ಘಟಕಗಳಿಗೆ ಅರ್ಜಿ ಸಲ್ಲಿಸಿ, ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಉಳಿದಂತೆ, ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಹುದ್ದೆಗಳ ಲಿಖಿತ ಪರೀಕ್ಷೆಗೆ ಮೇಲ್ಕಂಡಂತೆ ನೀಡಲಾಗಿರುವ ಕಾರಣಗಳಿಂದಾಗಿ ಲಿಖಿತ ಪರೀಕ್ಷಾ ಕೇಂದ್ರದ ಆಯ್ಕೆಯ ಅವಕಾಶ ಕಲ್ಪಿಸಲು ಸಾಧ್ಯವಾಗುವುದಿಲ್ಲ. |

| | | |
|---|---|---|
| ಇ) | ರಾಜ್ಯದ ಲಕ್ಷಾಂತರ ಬಡ ಅಭ್ಯರ್ಥಿಗಳು ಓದು ಮತ್ತು ಕೆಲಸಕ್ಕಾಗಿ ಬೆಂಗಳೂರು, ಧಾರವಾಡದಂತಹ ದೂರದ ಊರಿಗೆ ವಲಸೆ ಬರುತ್ತಿದ್ದು, ಇಂತಹ ಅಭ್ಯರ್ಥಿಗಳಿಗೆ ಪರೀಕ್ಷೆಯನ್ನು ಬರೆಯಲು ಅವರ ದೂರದ ಊರುಗಳಿಗೆ ಹೋಗಲು ಆಗುತ್ತಿಲ್ಲದಿರುವುದು ಸರ್ಕಾರದ ಗಮನ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ. |
| ಈ) | ಇದರಿಂದ ಎಷ್ಟೋ ಅಭ್ಯರ್ಥಿಗಳು ಪರೀಕ್ಷೆಗೆ ಹಾಜರಾಗದೆ ಅವಕಾಶ ವಂಚಿತರಾಗುತ್ತಿದ್ದು, ಇದರ ಬಗ್ಗೆ ಸರ್ಕಾರದ ನಿಲುವೇನು? | ಪೊಲೀಸ್ ಇಲಾಖೆಯಿಂದ ನಡೆಸಲಾಗಿರುವ ಪೊಲೀಸ್ ಕಾನ್ಸ್‌ಟೇಬಲ್ ಮತ್ತು ಸಬ್-ಇನ್ಸ್‌ಪೆಕ್ಟರ್ ಹುದ್ದೆಗಳಿಗೆ ಅರ್ಜಿ ಸಲ್ಲಿಸಿ ಲಿಖಿತ ಪರೀಕ್ಷೆಗೆ ಅರ್ಹರಾಗಿರುವ ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಿಂದ ವಂಚಿತರಾಗಬಾರದೆಂಬ ಕಾರಣದಿಂದ ಇಲಾಖೆಯಿಂದ ಅಭ್ಯರ್ಥಿಗಳಿಗೆ ಸದರಿಯವರುಗಳ ಸ್ವಂತ ಜಿಲ್ಲೆ / ಆಯ್ಕೆ ಬಯಸಿರುವ ಜಿಲ್ಲೆ / ನಗರಗಳಲ್ಲಿಯೇ ಲಿಖಿತ ಪರೀಕ್ಷೆಗಳನ್ನು ನಡೆಸಲು ಕ್ರಮ ಕೈಗೊಳ್ಳಲಾಗಿರುತ್ತದೆ. |

**ಸಂಖ್ಯೆ: ಒಇ 10 ಪಿಇಐ 2021**

**(ಬಸವರಾಜ ಬೊಮ್ಮಾಯಿ)**
ಗೃಹ ಸಚಿವರು